ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಮಂಗಳವಾರ, ದಿನಾಂಕ: 2ನೇ ಫೆಬ್ರುವರಿ, 2021

ಮೈಸೂರು ಮೂಡಾದಿಂದ ನಗರಪಾಲಿಕೆ ಹಸ್ತಾಂತರವಾದ ಬಡಾವಣೆಗಳ ಮೂಲಸೌಲಭ್ಯ ಕಲ್ಪಿಸುವ ಬಗ್ಗೆ

ಶ್ರೀ ಎಸ್. ನಾಗರಾಜ್ (ಸಂದೇಶ ನಾಗರಾಜ್) (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) :-

227(268) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮೈಸೂರು ಮಹಾನಗರ ಪಾಲಿಕೆಗೆ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ (ಮೂಡಾ) 2016-17ರಿಂದ ಈಚೆಗೆ ಹಸ್ತಾಂತರವಾಗಿರುವ ಬಡಾವಣೆಗಳ ಸಂಖ್ಯೆ ಎಷ್ಟು ; ಅವು ಯಾವುವು ಈ ಬಡಾವಣೆಗಳಿಂದ ನಗರಪಾಲಿಕೆಗೆ ಸಂದಾಯವಾಗುತ್ತಿರುವ ಮನೆ/ನಿವೇಶನ/ವಾಣಿಜ್ಯ ಕಟ್ಟಡ ಇತ್ಯಾದಿ ತೆರಿಗೆಗಳ ವಾರ್ಷಿಕ ಪ್ರಮಾಣ ಎಷ್ಟು ; (ವಿವರ ಒದಗಿಸುವುದು)

(ಆ) ಈ ಬಡಾವಣೆಗಳಿಗೆ ರಸ್ತೆ, ತೆರೆದ ಚರಂಡಿ, ಒಳಚರಂಡಿ, ಕುಡಿಯುವ ನೀರು, ಬೀದಿ ದೀಪ, ಉದ್ಯಾನವನ ಮೊದಲಾದ ಮೂಲಸೌಲಭ್ಯಗಳನ್ನು ಕಲ್ಪಿಸಿಕೊಡಲು ನಗರಪಾಲಿಕೆ ಕೈಗೊಂಡಿರುವ ಕ್ರಮಗಳು ಯಾವುವು ; ಕಾರ್ಯಗತಗೊಳಿಸಿರುವ ಪ್ರಮುಖ ಯೋಜನೆಗಳು ಯಾವುವು ; (ವಿವರ ನೀಡುವುದು)

(ಇ) ಯಾವ ಯಾವ ಬಡಾವಣೆಗಳಿಗೆ ಇನ್ನೂ ಯಾವ ಯಾವ ಮೂಲ ಸೌಲಭ್ಯಗಳ ಕೊರತೆ ಇದೆ ; ಅವುಗಳನ್ನು ಒದಗಿಸಲು ನಗರಪಾಲಿಕೆ ಕೈಗೊಂಡಿರುವ ಕ್ರಮಗಳು ಯಾವುವು ?